

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1484(1686) |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 14.03.2022 |
| 4) | ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ವಿದ್ಯುನ್ಮಾನ, ಐಟಿ-ಬಿಟಿ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕರೋನ ಸಂಕಷ್ಟದ ಸಮಯದಲ್ಲಿ ಉದ್ಯಮಿಗಳನ್ನು ಪ್ರೋತ್ಸಾಹಿಸಲು ರೂಪುಗೊಂಡಿರುವ ಕೌಶಲ್ಯ ಕರ್ನಾಟಕ ಯೋಜನೆಯ ಉದ್ದೇಶಗಳೇನು; (ವಿವರ ನೀಡುವುದು) | **ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮ (ಕೆ.ಎಸ್.ಡಿ.ಸಿ.)**<br><br>ಕರೋನಾ ಬಿಕ್ಕಟ್ಟಿನ ನಂತರ ಉದ್ಯಮಿಗಳಲ್ಲಿ ನವೀನತೆಯನ್ನು ತರಲು ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮವು ಕಿರು ಉದ್ಯಮಶೀಲತೆ ಕಾರ್ಯಕ್ರಮವನ್ನ ರೂಪುಗೊಳಿಸಿದ್ದು, ಇದರಿಂದ ತಳಮಟ್ಟದ ಕಿರು ಉದ್ಯಮಿಗಳಿಗೆ ಕೌಶಲ್ಯಗಳನ್ನು ಕಲಿಯಲು ಮತ್ತು ವ್ಯವಹಾರ ಜ್ಞಾನವನ್ನು ಹೊಂದಲು ಸಹಾಯ ಮಾಡುವ ಉದ್ಯಮಶೀಲತೆಯ ಕಾರ್ಯಕ್ರಮವಾಗಿರುತ್ತದೆ. ಈ ಯೋಜನೆಯು ೨೦೦ ತಳ ಮಟ್ಟದ ಕಿರು ಉದ್ಯಮಿಗಳನ್ನು ಪ್ರೋತ್ಸಾಹಿಸುವ ಹಾಗೂ ಮಹಿಳೆಯರಿಗೆ ವಿಶೇಷ ಗಮನವನ್ನು ನೀಡುವ ಮೂಲಕ ತರಬೇತಿ ಮತ್ತು ಸೌಲಭ್ಯವನ್ನು ಒದಗಿಸುವ ಮೂಲಕ ಉದ್ಯಮಶೀಲತೆಯ ಪ್ರತಿಯೊಂದು ಹಂತದಲ್ಲೂ ಇರುವ ಹಲವಾರು ಸವಾಲುಗಳನ್ನು ಎದುರಿಸಲು ಸಹಾಯ ಮಾಡುವುದಾಗಿದೆ. |
| ಆ) | ಕೌಶಲ್ಯ ಕರ್ನಾಟಕ ಯೋಜನೆಯಡಿ ಕಳೆದ 3 ವರ್ಷಗಳಲ್ಲಿ ರೂಪಿಸಿರುವ ಕಾರ್ಯಕ್ರಮಗಳು ಯಾವುವು; ಇದಕ್ಕಾಗಿ ಸರ್ಕಾರ ಬಿಡುಗಡೆ ಮಾಡಿರುವ ಅನುದಾನವೆಷ್ಟು; ಈ ಕಾರ್ಯಕ್ರಮಗಳ ಪ್ರಯೋಜನೆ ಪಡೆದಿರುವ ಫಲಾನುಭವಿಗಳೆಷ್ಟು; (ವಿವರ ನೀಡುವುದು) | **ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮ (ಕೆ.ಎಸ್.ಡಿ.ಸಿ.)**<br><br>ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮವು ಪ್ರಧಾನ ಮಂತ್ರಿ ಕೌಶಲ್ಯ ವಿಕಾಸ ಯೋಜನೆ ಹಾಗೂ ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆಯನ್ನು ಜಾರಿಗೆ ತಂದಿದ್ದು, ರಾಜ್ಯದ ಯುವ ಜನತೆಗೆ ಅಲ್ಪಾವಧಿ ಕೌಶಲ್ಯಾಧಾರಿತ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಉದ್ಯೋಗ ಕಲ್ಪಿಸುವ ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದೆ. (ಕಾರ್ಯಕ್ರಮಗಳ ಸಮಗ್ರ ವಿವರಗಳನ್ನು ಅನುಬಂಧ-1 ರಲ್ಲಿ ನೀಡಲಾಗಿದೆ).<br>**ಅನುದಾನದ ವಿವರ ಈ ಕೆಳಕಂಡಂತಿದೆ..**<br>(ರೂ.ಲಕ್ಷಗಳಲ್ಲಿ)<br><br>ಕ್ರಸಂ / ವರ್ಷ / ಬಿಡುಗಡೆಗೊಂಡ ಅನುದಾನ<br>1 / 2019-20 / 7309.25<br>2 / 2020-21 / 6541.75<br>3 / 2021-22 / 5875.00<br><br>**ಸಿಡಾಕ್**<br><br>ಕರ್ನಾಟಕ ಉದ್ಯಮಶೀಲತಾಭಿವೃದ್ಧಿ ಕೇಂದ್ರದಿಂದ ಕಳೆದ 3 ವರ್ಷಗಳಲ್ಲಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳು ಈ ಕೆಳಗಿನಂತಿರುತ್ತವೆ. |

| ವರ್ಷ | ಕಾರ್ಯಕ್ರಮಗಳು | ಅನುದಾನ (ರೂ.ಲಕ್ಷಗಳಲ್ಲಿ ) | ಅಭ್ಯರ್ಥಿಗಳ ಸಂಖ್ಯೆ |
|---|---|---|---|
| 2018-19 | 1. ಔಟ್ ರೀಚ್ ಕಾರ್ಯಕ್ರಮದ ಅಭ್ಯರ್ಥಿಗಳಿಗೆ, ಭಾವಿ ಉದ್ಯಮಶೀಲರಿಗೆ ಹಾಗೂ ಉದ್ಯಮಶೀಲರಾಗಲು ಇಚ್ಛೆಯುಳ್ಳ ಯುವಕ ಯುವತಿಯರಿಗೆ ರೆಡಿ ಮತ್ತು ಸ್ಟಡಿ ಕಾರ್ಯಕ್ರಮ(304).<br>2. ಉದ್ಯಮಶೀಲರಾಗಲು ಇಚ್ಛೆಯುಳ್ಳ ಯುವಕ ಯುವತಿಯರಿಗೆ ಆರು ದಿನಗಳ ವಸತಿಯುತ ಗೋ ಕಾರ್ಯಕ್ರಮಗಳು (15).<br>3. ಪರಿಶಿಷ್ಟ ಜಾತಿಯ ಅಭ್ಯರ್ಥಿಗಳಿಗೆ ಏಳು ದಿನಗಳ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ (5).<br>4. ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಏಳು ದಿನಗಳ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ (2). | 237.02 | 16491 |
| 2019-20 | 1. ಭಾವಿ ಉದ್ಯಮಶೀಲರಿಗೆ ಹಾಗೂ ಉದ್ಯಮಶೀಲರಾಗಲು ಇಚ್ಛೆಯುಳ್ಳ ಯುವಕ ಯುವತಿಯರಿಗೆ ಕೌಶಲ್ಯ ಉದ್ಯೋಗ ರೆಡಿ ಮತ್ತು ಸ್ಟಡಿ ಕಾರ್ಯಕ್ರಮ(259).<br>2. ಉದ್ಯಮಶೀಲರಾಗಲು ಇಚ್ಛೆಯುಳ್ಳ ಯುವಕ ಯುವತಿಯರಿಗೆ ಆರು ದಿನಗಳ ಕೌಶಲ್ಯ ಉದ್ಯೋಗ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ (83).<br>3. ಪರಿಶಿಷ್ಟ ಜಾತಿಯ ಅಭ್ಯರ್ಥಿಗಳಿಗೆ ಆರು ದಿನಗಳ ಕೌಶಲ್ಯ ಉದ್ಯೋಗ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ (6).<br>4. ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಆರು ದಿನಗಳ ಕೌಶಲ್ಯ ಉದ್ಯೋಗ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ (2). | 244.00 | 12706 |
| 2020-21 | 1. ಆರು ದಿನಗಳ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ (20).<br>2. 30 ದಿನಗಳ ಕೌಶಲ್ಯ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ (55).<br>3. ಪರಿಶಿಷ್ಟಜಾತಿಯ ಅಭ್ಯರ್ಥಿಗಳಿಗೆ 30 ದಿನಗಳ ಕೌಶಲ್ಯ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ (5).<br>4. ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ 30 ದಿನಗಳ ಕೌಶಲ್ಯ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ (2). | 170.00 | 2308 |

**ದೀನ್‌ದಯಾಳ್ ಅಂತ್ಯೋದಯ ಯೋಜನೆ-ರಾಷ್ಟ್ರೀಯ ನಗರ ಜೀವನೋಪಾಯ ಅಭಿಯಾನ (ಡೇ-ನಲ್ಮ್)**

**ಡೇ-ನಲ್ಮ್ ಅಭಿಯಾನದಡಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿರುತ್ತದೆ.**

**1) ಸಾಮಾಜಿಕ ಕ್ರೋಢೀಕರಣ ಮತ್ತು ಸಾಂಸ್ಥಿಕ ಅಭಿವೃದ್ಧಿ:**
ಸದರಿ ಉಪಘಟಕದಡಿ ಮಹಿಳಾ ಸ್ವ-ಸಹಾಯ ಸಂಘ, ಪ್ರದೇಶ ಮಟ್ಟದ ಒಕ್ಕೂಟಗಳ ರಚನೆ ಹಾಗೂ ಸ್ವ-ಸಹಾಯ ಸಂಘಗಳಿಗೆ ರೂ.10,000/- ಮತ್ತು ಒಕ್ಕೂಟಗಳಿಗೆ ರೂ.50,000/- ಆವರ್ತಕ ನಿಧಿ ವಿತರಣೆ ಹಾಗೂ ಸಂಘ ಮತ್ತು ಒಕ್ಕೂಟದ ಸದಸ್ಯರುಗಳಿಗೆ ವಿವಿಧ ಸಾಮರ್ಥ್ಯ ಅಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗುವುದು.

**2) ಸ್ವಯಂ ಉದ್ಯೋಗ ಕಾರ್ಯಕ್ರಮ:**
ಸದರಿ ಉಪಘಟಕದಡಿ ವೈಯಕ್ತಿಕ ಕಿರು ಉದ್ದಿಮೆ, ಗುಂಪು ಕಿರು ಉದ್ದಿಮೆ ಹಾಗೂ ಎಸ್‌ಹೆಚ್‌ಜಿ ಬ್ಯಾಂಕ್ ಕ್ರೆಡಿಟ್ ಲಿಂಕೇಜ್‌ಗೆ ಸಂಬಂಧಿಸಿದಂತೆ ಕ್ರಮವಾಗಿ ಬ್ಯಾಂಕಿನಿಂದ ರೂ.2.00 ಲಕ್ಷ ರೂ.10.00 ಲಕ್ಷ ಮತ್ತು ರೂ.1.00 ಲಕ್ಷವರೆಗೆ ಬ್ಯಾಂಕಿನಿಂದ ಸಾಲ ಸೌಲಭ್ಯವನ್ನು ಕಲ್ಪಿಸಲಾಗುವುದು. ಶೇ.7 ಕ್ಕಿಂತ ಮೇಲ್ಪಟ್ಟ ಬಡ್ಡಿ ಸಹಾಯಧನವನ್ನು ಯೋಜನೆಯಿಂದ ಭರಿಸಿ ಪಾವತಿಸಲಾಗುವುದು ಹಾಗೂ ಸ್ವ-ಸಹಾಯ ಸಂಘಗಳು ನಿಯಮಿತವಾಗಿ ಸಾಲವನ್ನು ಮರು ಪಾವತಿಸಿದರೆ ಶೇ.3 ರಷ್ಟು ಹೆಚ್ಚುವರಿ ಬಡ್ಡಿ ಸಹಾಯಧನ ನೀಡಲಾಗುವುದು ಹಾಗೂ ಉದ್ಯಮಶೀಲತಾ ತರಬೇತಿಯನ್ನು ನೀಡಲಾಗುವುದು.

**3) ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳ ನಿಯುಕ್ತಿ:**
ಸದರಿ ಉಪಘಟಕದಡಿ ನಗರದ ನಿರುದ್ಯೋಗ ಯುವಕ / ಯುವತಿಯರಿಗೆ ವಿವಿಧ ಉದ್ಯೋಗಾಧಾರಿತ ಕೌಶಲ್ಯಾಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ನೀಡಿ, ಪ್ರಮಾಣೀಕರಣ ಮತ್ತು ಮೌಲ್ಯಮಾಪನವನ್ನು ಕೈಗೊಂಡು, ಕೇಂದ್ರ ಸರ್ಕಾರದ ಪ್ರಮಾಣ ಪತ್ರವನ್ನು ನೀಡಿ, ತರಬೇತಿಯನ್ನು ಪಡೆದುಕೊಂಡ ಶೇ.70 ರಷ್ಟು ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಅಥವಾ ವೇತನಾಧಾರಿತ ಉದ್ಯೋಗವನ್ನು ಕಲ್ಪಿಸಲಾಗುವುದು.

**4)ನಗರದ ವಸತಿ ರಹಿತರಿಗೆ ಆಶ್ರಯ:**
ಸದರಿ ಉಪಘಟಕದಡಿ ನಗರದ ವಸತಿ ರಹಿತರನ್ನು ರ್‍ಯಾಪಿಡ್ ಸಮೀಕ್ಷೆಯ ಮೂಲಕ ಗುರುತಿಸಿ, ಆಶ್ರಯವನ್ನು ಕಲ್ಪಿಸಲಾಗುವುದು.

**5)ನಗರದ ಬೀದಿ ವ್ಯಾಪಾರಸ್ಥರಿಗೆ ಬೆಂಬಲ:**
ಸದರಿ ಉಪಘಟಕದಡಿ ನಗರದ ಬೀದಿ ವ್ಯಾಪಾರಸ್ಥರನ್ನು ಗುರುತಿಸಿ, ಗುರುತಿನ ಚೀಟಿ ಮತ್ತು ಮಾರಾಟ ಪ್ರಮಾಣ ಪತ್ರವನ್ನು ವಿತರಿಸಲಾಗುವುದು.

**6)ಸಾಮರ್ಥ್ಯ ಅಭಿವೃದ್ಧಿ ಮತ್ತು ತರಬೇತಿ:**
ಸದರಿ ಉಪಘಟಕದಡಿ ಅಭಿಯಾನವನ್ನು ಅನುಷ್ಠಾನಗೊಳಿಸಲು ತೊಡಗಿಸಿಕೊಂಡಿರುವ ಅಧಿಕಾರಿ / ಸಿಬ್ಬಂದಿಗಳಿಗೆ ವಿವಿಧ ಸಾಮರ್ಥ್ಯ ಅಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ನೀಡಲಾಗುತ್ತಿದೆ.

<table>
<tr>
<td></td>
<td></td>
<td>ಕಳೆದ 3 ವರ್ಷಗಳಲ್ಲಿ ಸರ್ಕಾರದಿಂದ ಡೇ-ನಲ್ಮ್ ಅಭಿಯಾನಕ್ಕೆ ಬಿಡುಗಡೆಯಾದ ಅನುದಾನ ವಿವರ ಈ ಕೆಳಕಂಡಂತಿರುತ್ತದೆ.
<table>
<tr><th>ಕ್ರ. ಸಂ</th><th>ವರ್ಷ</th><th>ಬಿಡುಗಡೆಯಾದ ಮೊತ್ತ (ರೂ.ಲಕ್ಷಗಳಲ್ಲಿ)</th></tr>
<tr><td>1</td><td>2018-19</td><td>0</td></tr>
<tr><td>2</td><td>2019-20</td><td>2742.70</td></tr>
<tr><td>3</td><td>2020-21</td><td>5345.03</td></tr>
<tr><td></td><td>ಒಟ್ಟು</td><td>8087.73</td></tr>
</table>
ಕಳೆದ 3 ವರ್ಷಗಳಲ್ಲಿ ಘಟಕವಾರು ಪ್ರಯೋಜನ ಪಡೆದ ಫಲಾನುಭವಿಗಳ ವಿವರವನ್ನು ಅನುಬಂಧ-2 ರಲ್ಲಿ ಲಗತ್ತಿಸಿದೆ.</td>
</tr>
<tr>
<td>ಇ)</td>
<td>ಬದಲಾದ ಈ ದಿನಮಾನಗಳಿಗೆ ಅನುಗುಣವಾಗಿ ಉದ್ಯಮಶೀಲತಾ ಗುಣಗಳನ್ನು ಹೆಚ್ಚಿಸಲು ಕರ್ನಾಟಕ ಉದ್ಯಮಶೀಲತಾ ಅಭಿವೃದ್ಧಿ ಕೇಂದ್ರವು(ಸಿಡಾಕ್) ನಿರ್ವಹಿಸುತ್ತಿರುವ ಪಾತ್ರಗಳೇನು; (ವಿವರ ನೀಡುವುದು)</td>
<td><u>ಸಿಡಾಕ್</u><br>ಉದ್ಯಮಶೀಲ ಗುಣಗಳನ್ನು ಹೆಚ್ಚಿಸಲು ಕರ್ನಾಟಕ ಉದ್ಯಮಶೀಲತಾಭಿವೃದ್ಧಿ ಕೇಂದ್ರ(ಸಿಡಾಕ್)ವು ಉದ್ಯಮಶೀಲತಾ ಪ್ರೇರಣಾ ಶಿಬಿರ ಹಾಗೂ ಉದ್ಯಮಶೀಲತಾ ತಿಳುವಳಿಕೆ ಕಾರ್ಯಕ್ರಮಗಳ ಮುಖಾಂತರ ಪ್ರೇರಣೆ, ತಿಳುವಳಿಕೆಯನ್ನು ಆಸಕ್ತರಲ್ಲಿ ಮೂಡಿಸಿ ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮಗಳ ಮುಖಾಂತರ ಸಾಧನಾ ಪ್ರೇರಣಾ ತರಬೇತಿಯನ್ನು ನೀಡಿ ಉದ್ಯಮಶೀಲತೆಯ ಗುಣಗಳನ್ನು ಹೆಚ್ಚಿಸಿ ಸ್ವಯಂ ಉದ್ಯೋಗ ಆಕಾಂಕ್ಷಿಗಳನ್ನು ಪ್ರೋತ್ಸಾಹಿಸುತ್ತದೆ.</td>
</tr>
<tr>
<td>ಈ)</td>
<td>ಸಿಬ್ಬಂದಿಗಳ ಕೊರತೆಯಿಂದ ಕೌಶಲ್ಯ ಅಭಿವೃದ್ಧಿ ಕಾರ್ಯಕ್ರಮಗಳ ತರಬೇತಿಗೆ ಅಡಚಣೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಸಂಬಂಧ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು)</td>
<td><u>ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮ (ಕೆ.ಎಸ್.ಡಿ.ಸಿ.)</u><br>ಹೌದು,<br>ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮದ ಕೇಂದ್ರ ಕಛೇರಿ ಹಾಗೂ ಜಿಲ್ಲಾ ಕೌಶಲ್ಯಾಭಿವೃದ್ಧಿ ಕಛೇರಿಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ವಿವಿಧ ಇಲಾಖೆ/ ನಿಗಮ/ಮಂಡಳ/ಸಂಸ್ಥೆಗಳ ಇಚ್ಛೆಯುಳ್ಳ ನೌಕರರಿಂದ ನಿಯೋಜನೆ ಮೂಲಕ ಭರ್ತಿ ಮಾಡಿಕೊಳ್ಳುವ ಸಲುವಾಗಿ ದಿನ ಪತ್ರಿಕೆಯಲ್ಲಿ ಪ್ರಕಟಣೆಯನ್ನು ಹೊರಡಿಸಿ, ಆಸಕ್ತರಿಂದ ಮನವಿಗಳನ್ನು ಆಹ್ವಾನಿಸಲಾಗಿದೆ. ಈ ಸಂಬಂಧ ಮನವಿಗಳು ಸ್ವೀಕೃತವಾಗುತ್ತಿದ್ದು, ಸದರಿ ನೌಕರರ ಮಾತೃ ಇಲಾಖೆಗಳಿಂದ ನೌಕರರ ಸೇವೆಯನ್ನು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಗೆ ಬಿಟ್ಟುಕೊಡುವ ಕುರಿತಂತೆ ಸಹಮತಿಯನ್ನು ಪಡೆದು, ನಂತರ ನಿಯೋಜಿಸಿಕೊಳ್ಳಲು ಕ್ರಮವಹಿಸಲಾಗುತ್ತಿದೆ. ಈಗಾಗಲೇ 'ಡಿ' ದರ್ಜೆ ನೌಕರರುಗಳನ್ನು ಎಲ್ಲಾ ಜಿಲ್ಲಾ ಕೌಶಲ್ಯಾಭಿವೃದ್ಧಿ ಕಛೇರಿಗಳು ಹಾಗ್ಯೂ ನಿಗಮದ ಕೇಂದ್ರ ಕಛೇರಿಯಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಂಡು ಕಾರ್ಯನಿರ್ವಹಿಸಲಾಗುತ್ತಿದೆ.</td>
</tr>
</table>

ಸಂಖ್ಯೆ: ಕೌಉಜೀಇ 10 ಕೌಗುಪ್ರ 2022

(ಡಾ|| ಸಿ.ಎನ್. ಅಶ್ವತ್ಥ್‌ನಾರಾಯಣ)
ಉನ್ನತ ಶಿಕ್ಷಣ, ವಿದ್ಯುನ್ಮಾನ, ಐಟಿ-ಬಿಟಿ ಮತ್ತು
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಇಲಾಖಾ ಸಚಿವರು.

ಅನುಬಂಧ –1

ಕರ್ನಾಟಕ ಕೌಶಲ್ಯ ಅಭಿವೃದ್ಧಿ ನಿಗಮದ ವತಿಯಿಂದ 2021–22 ನೇ ಸಾಲಿಗಾಗಿ ರೂಪಿಸಿದ ಕಾರ್ಯಕ್ರಮಗಳ ವಿವರ :

- 2021–22 ನೇ ಸಾಲಿನಲ್ಲಿ ಭಾರತ ಸ್ವಾತಂತ್ರ್ಯದ ಅಮೃತ ಮಹೋತ್ಸವದ ಸವಿನೆನಪಿಗಾಗಿ 15 ನೇ ಆಗಸ್ಟ್ 2021 ರ ಭಾಷಣದಲ್ಲಿ ಈಗಾಗಲೇ ಅಮೃತ ಕೌಶಲ್ಯ ತರಬೇತಿ ಕಾರ್ಯಕ್ರಮವನ್ನು ಕರ್ನಾಟಕ ಕೌಶಲ್ಯ ಅಭಿವೃದ್ಧಿ ನಿಗಮದ ಮೂಲಕ ಜಾರಿಗೊಳಿಸಲು ಆದೇಶಿಸಲಾಗಿದ್ದು, ಈ ಕಾರ್ಯಕ್ರಮದಡಿ ಒಟ್ಟಾರೆ 75000 ಅಭ್ಯರ್ಥಿಗಳಿಗೆ ಉಚಿತ ಕೌಶಲ್ಯಾಧಾರಿತ ತರಬೇತಿಯನ್ನು ನೀಡುವ ಗುರಿಯನ್ನು ಹೊಂದಲಾಗಿದೆ. ಪ್ರಸ್ತ 2021–22 ನೇ ಸಾಲಿನಲ್ಲಿ 38460 ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗ, ಅಲ್ಪಸಂಖ್ಯಾತರು ಹಾಗೂ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಉಚಿತ ಕೌಶಲ್ಯಾಧಾರಿತ ತರಬೇತಿ ನೀಡುವ ಗುರಿಯನ್ನು ಹೊಂದಲಾಗಿದ್ದು, ಈಗಾಗಲೇ 38460 ಅಭ್ಯರ್ಥಿಗಳಿಗೆ ತರಬೇತಿ ನೀಡಲು ಕಾರ್ಯಾದೇಶ ಹೊರಡಿಸಲಾಗಿದೆ. ಎಲ್ಲಾ ಅಭ್ಯರ್ಥಿಗಳಿಗೆ ತರಬೇತಿ ಕಾರ್ಯಕ್ರಮಗಳು ಪ್ರಾರಂಭವಾಗಿದ್ದು, ಮುಕ್ತಾಯದ ಹಂತದಲ್ಲಿರುತ್ತದೆ. 2022–23 ನೇ ಸಾಲಿಗೂ ಕೂಡ 36540 ಅಭ್ಯರ್ಥಿಗಳಿಗೆ ಅಮೃತ ಕೌಶಲ್ಯ ತರಬೇತಿ ಕಾರ್ಯಕ್ರಮದಡಿ ಉಚಿತ ಕೌಶಲ್ಯಾಧಾರಿತ ತರಬೇತಿಯನ್ನು ನೀಡುವ ಗುರಿ ಹೊಂದಲಾಗಿದೆ.
- **ಆರೋಗ್ಯ ವಲಯದ Crash Course ತರಬೇತಿ** : ಕೋವಿಡ್ – 19 ರ ಸಂಬಂಧ ಆರೋಗ್ಯ ವಲಯದಲ್ಲಿ ಅಗತ್ಯವಿರುವ ಕೌಶಲ್ಯಾಧಾರಿತ ಮಾನವ ಸಂಪನ್ಮೂಲ ದೊರಕಿಸಿಕೊಡಲು 6 ಜಾಬ್‌ರೋಲ್‌ಗಳಲ್ಲಿ Crash Course ಗಳನ್ನು ಪ್ರಾರಂಭಿಸಲಾಗಿದೆ. ರಾಜ್ಯದ 8 ಜಿಲ್ಲೆಗಳಲ್ಲಿ ಈಗಗಲೇ ಪ್ರಾಯೋಗಿಕವಾಗಿ ಜಾರಿಗೊಳಿಸಲಾಗಿದ್ದು, 74 ತರಬೇತಿ ಸಂಸ್ಥೆಗಳ ಮೂಲಕ 15000 ಅಭ್ಯರ್ಥಿಗಳ ತರಬೇತಿಗೆ ಕಾರ್ಯಾದೇಶ ನೀಡಲಾಗಿರುತ್ತದೆ. ಅದರಂತೆ 11154 ತರಬೇತಿದಾರರಿಗೆ ತರಬೇತಿ ಪ್ರಾರಂಭವಾಗಿರುತ್ತದೆ. ಈ ಮೂಲಕ ಸಂಭಾವ್ಯ ಕೊವೀಡ್ 3 ನೇ ಅಲೆಗೆ ಸಂಬಂಧಿಸಿದಂತೆ ಸಿಬ್ಬಂದಿಗಳ ಕೊರತೆಯನ್ನು ನಿವಾರಿಸಲು ಕ್ರಮವಹಿಸಲಾಗಿದೆ.
- **ಪೂರ್ವಕಲಿಕೆಯ ಗುರುತಿಸುವಿಕೆ Recognition of Prior Learning (RPL)** : ಈ ಕಾರ್ಯಕ್ರಮದಡಿ ಒಟ್ಟು 6000 ಅಭ್ಯರ್ಥಿಗಳಿಗೆ ತರಬೇತಿ ನೀಡುವ ಗುರಿಯನ್ನು ಹೊಂದಲಾಗಿದ್ದು, 4835 ಅಭ್ಯರ್ಥಿಗಳಿಗೆ ಈಗಾಗಲೇ ತರಬೇತಿ ಕಾರ್ಯವು ಪೂರ್ಣಗೊಂಡಿರುತ್ತದೆ.
- ಸಂಕಲ್ಪ ಯೋಜನೆ : ಸಂಕಲ್ಪ ಯೋಜನೆಯಡಿ 500 ಐಟಿಐ/ ಡಿಪ್ಲೋಮಾ/ ಪದವಿ ಉಪನ್ಯಾಸಕರಿಗೆ ಅಧುನಿಕ ಸಂಭೋಧನಾ ಕೌಶಲ್ಯ ಹಾಗೂ 21st Century Skills, Communicative English Skills ತರಬೇತಿ ನೀಡಲಾಗುತ್ತಿದೆ.
- **ಆಂಗ್ಲ ಭಾಷಾ ಪ್ರಯೋಗಾಲಯಗಳು** : ಪ್ರಯೋಗಾಲಯಗಳನ್ನು ಆಯ್ಕೆಯಾದ ಯಾದಗಿರಿ, ಕೊಪ್ಪಳ, ಚಿತ್ರದುರ್ಗ, ಚಾಮರಾಜನಗರ ಮತ್ತು ಮಂಗಳೂರು ಜಿಲ್ಲೆಗಳ ಜಿಟಿಟಿಸಿ ಮತ್ತು ಐಟಿಐ ನ ಐದು ಭಾಷಾ ಪ್ರಯೋಗಾಲಯಗಳನ್ನು ನಿರ್ಮಿಸಿ ಪ್ರತಿ ಪ್ರಯೋಗಾಲಯದಿಂದ 200 ಅಭ್ಯರ್ಥಿಗಳಂತೆ ಒಟ್ಟು 1000 ಅಭ್ಯರ್ಥಿಗಳಿಗೆ ತರಬೇತಿ ನೀಡಲು ಮತ್ತು ಭಾಷಾ ತರಬೇತಿಯನ್ನು ಒದಗಿಸಲು ಕಾರ್ಯಾದೇಶವನ್ನು ನೀಡಲಾಗಿದೆ. ಯೋಜನೆಯ ಅನುಷ್ಠಾನವು ಪ್ರಗತಿಯಲ್ಲಿದೆ. ಮಾರ್ಚ್ 2022 ರೊಳಗೆ 5 ಲ್ಯಾಬ್‌ಗಳನ್ನು ಸ್ಥಾಪಿಸಲಾಗುವುದು ಹಾಗೂ ಇಂಗ್ಲಿಷ್ ಭಾಷೆಯ ತರಬೇತಿಯನ್ನು ಪ್ರಾರಂಭಿಸಲಾಗುವುದು.
- **Domain Skills Training** : ಎರಡು ವಿಭಿನ್ನ ವಲಯಗಳಲ್ಲಿ 400 ತರಬೇತುದಾರರಿಗೆ ತರಬೇತಿ ನೀಡಲು ಟಿಒಟಿ ಡೊಮೈನ್ ಕೌಶಲ್ಯಗಳಿಗಾಗಿ ಜಿಟಿಟಿಸಿ ಮತ್ತು ಕೆಜಿಟಿಟಿಐ ಯಿಂದ ಪ್ರಸ್ತಾವನೆಗಳನ್ನು ಸ್ವೀಕರಿಸಿದೆ. ರಾಜ್ಯದ ಜಿಲ್ಲೆಗಳಾದ್ಯಂತ ನಾಲ್ಕು ವಿಭಿನ್ನ ವಲಯಗಳಲ್ಲಿ 300 ತರಬೇತುದಾರರಿಗೆ ತರಬೇತಿ ನೀಡಲು ಆರ್.ಎಫ್.ಪಿ ಪ್ರಕಟಿಸಲಾಗಿದೆ. ಇ–ಟೆಂಡರ್ ಪ್ರಕ್ರಿಯೆ ನಡೆಯುತ್ತಿದೆ.
- **Localization of Content** : ಕೌಶಲ್ಯ ತರಬೇತಿಯ ವಿವಿಧ ಜಾಬ್‌ರೋಲ್‌ಗಳ ಪಠ್ಯಕ್ರಮ ಆಂಗ್ಲಭಾಷೆಯಿಂದ ಕನ್ನಡ ಭಾಷೆಗೆ ಭಾಷಾಂತರಗೊಳಿಸಲು ಕ್ರಮವಹಿಸಲಾಗಿದ್ದು, ಈಗಾಗಲೇ 16 ಜಾಬ್‌ರೋಲ್‌ಗಳ ಪಠ್ಯಕ್ರಮಗಳನ್ನು ಮತ್ತು ಜಿಲ್ಲಾ ಕೌಶಲ್ಯ ಅಭಿವೃದ್ಧಿ ಯೋಜನೆಯ 4 ಹಂತದ ಮಾರ್ಗಸೂಚಿಗಳನ್ನು ಭಾಷಾಂತರಗೊಳಿಸಿದ್ದು, ಇನ್ನು 45 ಜಾಬ್‌ರೋಲ್‌ಗಳ ಪಠ್ಯಕ್ರಮಗಳ ಭಾಷಾಂತರ ಕಾರ್ಯ ಪ್ರಗತಿಯಲ್ಲಿರುತ್ತದೆ.

- ಕಿರು ಉದ್ಯಮಶೀಲತೆ ಕಾರ್ಯಕ್ರಮ (NEP) : ಹೆಸರೇ ಸೂಚಿಸುವಂತೆ ತಳಮಟ್ಟದ ಕಿರು ಉದ್ಯಮಿಗಳಿಗೆ ಕೌಶಲ್ಯಗಳನ್ನು ಕಲಿಯಲು ಮತ್ತು ವ್ಯವಹಾರ ಜ್ಞಾನವನ್ನು ಪಡೆಯಲು ಸಹಾಯ ಮಾಡುವ ಉದ್ಯಮಶೀಲತೆಯ ಕಾರ್ಯಕ್ರಮವಾಗಿದ್ದು, 200 ತಳ ಮಟ್ಟದ ಕಿರು ಉದ್ಯಮಿಗಳನ್ನು ಪ್ರೋತ್ಸಾಹಿಸುವ ಹಾಗೂ ಮಹಿಳೆಯರಿಗೆ ವಿಶೇಷ ಗಮನವನ್ನು ನೀಡುವ ಮೂಲಕ ತರಬೇತಿ ಮತ್ತು ಸೌಲಭ್ಯ ವನ್ನು ಒದಗಿಸುವ ಮೂಲಕ ಉದ್ಯಮಶೀಲತೆಯ ಪ್ರತಿಯೊಂದು ಹಂದದಲ್ಲೂ ಇರುವ ಹಲವಾರು ಸವಾಲುಗಳನ್ನು ಎದುರಿಸಲು ಸಹಾಯ ಮಾಡುವುದಾಗಿದೆ.
- Skill Connect (ಕೌಶಲ್ಯ ಸಂಪರ್ಕ) ಪೋರ್ಟಲ್ : ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮವು ಆಸಕ್ತ ಉದ್ಯೋಗದಾತರು ಹಾಗೂ ಉದ್ಯೋಗಾಂಕ್ಷಿಗಳನ್ನು ಒಂದೇ ವೇದಿಕೆಯಡಿ ತರಲು Skill Connect (ಕೌಶಲ್ಯ ಸಂಪರ್ಕ) ಪೋರ್ಟಲ್ ಅನ್ನು ಸೃಷ್ಟಿಸಿದ್ದು, ಅದನ್ನು ಮಾನ್ಯ ಮುಖ್ಯಮಂತ್ರಿಗಳು ದಿನಾಂಕ: 29.06.2020 ರಲ್ಲಿ ಉದ್ಘಾಟಿಸಿರುತ್ತಾರೆ.
- Convergence : ಕರ್ನಾಟಕ ಕೌಶಲ್ಯ ಅಭಿವೃದ್ಧಿ ನಿಗಮವು ವಿವಿಧ ಇಲಾಖೆಗಳ ಸಹಭಾಗಿತ್ವದೊಂದಿಗೆ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿದೆ.

  1) **ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ :** T A P – Talent Acceleration Programme ಮೂಲಕ 2000 ಅಂತಿಮ ವರ್ಷ ಬಿ.ಇ / ಬಿಎಸ್‌ಸಿ/ ಬಿ.ಸಿ.ಎ ವಿದ್ಯಾರ್ಥಿಗಳಿಗೆ ಫ್ಯೂಚರ್ ಸ್ಕಿಲ್ ನಲ್ಲಿ ತರಬೇತಿ ನೀಡಿ ಉದ್ಯೋಗ ಕಲ್ಪಸುವ ಕ್ರಮವಹಿಸಲಾಗಿದೆ.

  2) **ಪಂಚಾಯತ್ ರಾಜ್ ಇಲಾಖೆ :** ಸ್ವ ಸಹಾಯ ಸಂಘಗಳ ಮಹಿಳೆಯರಿಗೆ ಘನತ್ಯಾಜ್ಯ ನಿರ್ವಹಣೆಯ ತರಬೇತಿ ಹಾಗೂ ವಾಹನಾ ಚಾಲನಾ ತರಬೇತಿ

  3) **ಪೋಲಿಸ್ ಇಲಾಖೆ :** ಕಾರಗೃಹ ವಾಸಿಗಳಿಗೆ ಸ್ವಯಂ ಉದ್ಯೋಗ ಹಾಗೂ ಸ್ವಾವಲಂಬನಾ ತರಬೇತಿ

  4) **ಕೃಷಿ ಇಲಾಖೆ :** ಕೃಷಿ ವಿಜ್ಞಾನ ಕೇಂದ್ರಗಳನ್ನು ತರಬೇತಿ ಪಾಲುದಾರರನ್ನಾಗಿ ಮಾಡಿ ಕೃಷಿ ತರಬೇತಿ ಸೇರಿ ಸ್ವಯಂ ಉದ್ಯೋಗಗಳಲ್ಲಿ ತರಬೇತಿ (organic grower, Agricultural mechanic, seeds grower)

  5) **ಉನ್ನತ ಶಿಕ್ಷಣ ಇಲಾಖೆ :** Vishweshwariah Technical University & Karnataka State Open University ಸಂಸ್ಥೆಗಳು ತರಬೇತಿ ಪಾಲುದಾರರಾಗಿ ಫ್ಯೂಚರ್ ಸ್ಕಿಲ್ ನಲ್ಲಿ ತರಬೇತಿ ನೀಡಲಾಗುತ್ತಿದೆ.

- Industry Connect (Demand Drives Training) : Industry Connect ಕಾರ್ಯಕ್ರಮದ ಮೂಲಕ Industry Linkage Cell ಸ್ಥಾಪಿಸಲಾಗಿದ್ದು, ಕೈಗಾರಿಕೆಗಳನ್ನು ತರಬೇತಿ ಪಾಲುದಾರರನ್ನಗಿ ಮಾಡಿ ಅವರದೇ ತರಬೇತಿ ಕೇಂದ್ರಗಳ ಮೂಲಕ ಔದ್ಯೋಗಿಕ ಬೇಡಿಕೆಗಳ ಅನುಸಾರವಾಗಿ ಉದ್ಯೋಗ ಒದಗಿಸಲಾಗುತ್ತಿದೆ. (Flipkart, Sansera Technologies, kaynes technologies, Wipro GE, ELCIA, Mysore Industrial Association)
- Skill Gap Study ನಡೆಸಲು GRAAM ಸಂಸ್ಥೆಯೊಂದಿಗೆ ಒಡಂಬಡಿಕೆ ಮಾಡಿಕೊಂಡಿದ್ದು, ಈ ಸಂಬಂಧ ವಿಸ್ತೃತ ವರದಿಯು ಸಲ್ಲಿಕೆಯಾಗಿರುತ್ತದೆ.
- ಸ್ಕಿಲ್ ಹಬ್ (Skill Hub) : ರಾಜ್ಯದ ಯುವಕ-ಯುವತಿಯರಿಗೆ ಒಂದೇ ಸೂರಿನಡಿ ಉದ್ಯೋಗಾವಕಾಶ, ಕೌಶಲ್ಯ ತರಬೇತಿ ಮತ್ತು ಉದ್ಯಮಶೀಲತೆಯ ತರಬೇತಿ ನೀಡಲು ರಾಮನಗರ ಜಿಲ್ಲೆಯಲ್ಲಿ ಪೈಲಟ್ ಆಧಾರದ ಮೇರೆಗೆ ಸ್ಕಿಲ್ ಹಬ್ (ಖಇುಟಟ ಊಣಛ) ಅನ್ನು ದಿನಾಂಕ: 03.01.2022 ರಂದು ಸನ್ಮಾನ್ಯ ಮುಖ್ಯಮಂತ್ರಿಗಳು ಉದ್ಘಾಟಿಸಿರುತ್ತಾರೆ.
- Skill on Wheels : ಕೌಶಲ್ಯಾಭಿವೃದ್ಧಿ ನಿಗಮದ ವತಿಯಿಂದ Skill on Wheels ಯೋಜನೆಯನ್ನು ಪೈಲಟ್ ಆಧಾರದ ಮೇರೆಗೆ ಪ್ರಾರಂಭಿಸಲಾಗುತ್ತಿದ್ದು, ದೂರದ ಹಳ್ಳಿಗಾಡಿನ ಹಾಗೂ ಗುಡ್ಡಗಾಡು ಪ್ರದೇಶದಲ್ಲಿ ವಾಸಿಸುವ ಯುವ ಜನತೆಗೆ ಹಾಗೂ ಇತರೆ ಪ್ರದೇಶಗಳಲ್ಲಿನ ಯುವ ಜನತೆಗೆ ಕೌಶಲ್ಯಾಧಾರಿತ ತರಬೇತಿಯಲ್ಲಿ ಸ್ಥಳದಲ್ಲಿಯೇ ನೀಡುವ ಮಹಾತ್ವಾಂಕ್ಷೆಯನ್ನು ಹೊಂದಿರುತ್ತದೆ.

# ಅನುಬಂಧ-2

<table>
<tr><th>ಕ್ರ. ಸಂ</th><th>ಉಪಘಟಕದ ಹೆಸರು</th><th colspan="4">ಸಾಧನೆ</th></tr>
<tr><td rowspan="4">1</td><td rowspan="4">ಸಾಮಾಜಿಕ ಕ್ರೋಢೀಕರಣ ಮತ್ತು ಸಾಂಸ್ಥಿಕ ಅಭಿವೃದ್ಧಿ</td><td>ವರ್ಷ</td><td colspan="3">ಪ್ರಯೋಜನ ಪಡೆದ ಸ್ವ-ಸಹಾಯ ಸಂಘಗಳ ಸಂಖ್ಯೆ</td></tr>
<tr><td>2018-19</td><td colspan="3">2383</td></tr>
<tr><td>2019-20</td><td colspan="3">1891</td></tr>
<tr><td>2020-21</td><td colspan="3">1107</td></tr>
<tr><td rowspan="4">2</td><td rowspan="4">ಸ್ವಯಂ ಉದ್ಯೋಗ ಕಾರ್ಯಕ್ರಮ</td><td>ವರ್ಷ</td><td>ವೈಯಕ್ತಿಕಕಿರು ಉದ್ದಿಮೆ</td><td>ಗುಂಪು ಕಿರು ಉದ್ದಿಮೆ</td><td>ಎಸ್‌ಹೆಚ್‌ಜಿ ಬ್ಯಾಂಕ್‌ಕ್ರೆಡಿಟ್ ಲಿಂಕೇಜ್</td></tr>
<tr><td>2018-19</td><td>2427</td><td>89</td><td>427</td></tr>
<tr><td>2019-20</td><td>1194</td><td>105</td><td>672</td></tr>
<tr><td>2020-21</td><td>989</td><td>50</td><td>316</td></tr>
<tr><td rowspan="4">3</td><td rowspan="4">ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳ ನಿಯುಕ್ತಿ</td><td>ವರ್ಷ</td><td colspan="3">ತರಬೇತಿಯನ್ನು ಪಡೆದ ಫಲಾನುಭವಿಗಳ ಸಂಖ್ಯೆ</td></tr>
<tr><td>2018-19</td><td colspan="3">3038</td></tr>
<tr><td>2019-20</td><td colspan="3">4849</td></tr>
<tr><td>2020-21</td><td colspan="3">5732</td></tr>
<tr><td rowspan="4">4</td><td rowspan="4">ನಗರದ ವಸತಿ ರಹಿತರಿಗೆ ಆಶ್ರಯ</td><td>ವರ್ಷ</td><td colspan="3">ಆಶ್ರಯವನ್ನು ಪಡೆದ ವಸತಿರಹಿತರ ಸಂಖ್ಯೆ</td></tr>
<tr><td>2018-19</td><td colspan="3">1440</td></tr>
<tr><td>2019-20</td><td colspan="3">1900</td></tr>
<tr><td>2020-21</td><td colspan="3">1986</td></tr>
<tr><td rowspan="4">5</td><td rowspan="4">ನಗರದ ಬೀದಿ ವ್ಯಾಪಾರಸ್ಥರಿಗೆ ಬೆಂಬಲ</td><td>ವರ್ಷ</td><td colspan="3">ಗುರುತಿಸಲ್ಪಟ್ಟ ಬೀದಿ ವ್ಯಾಪಾರಿಗಳ ಸಂಖ್ಯೆ</td></tr>
<tr><td>2018-19</td><td colspan="3">21409</td></tr>
<tr><td>2019-20</td><td colspan="3">44946</td></tr>
<tr><td>2020-21</td><td colspan="3">17357</td></tr>
</table>